# ಶೋಷಿತ

೬ ಡಿಸೆಂಬರ್ ೧೯೭೪ ಖಾಸಗಿ ಪ್ರಸಾರಕ್ಕೆ ಸಂಚಿಕೆ: ೧

## ಹಳ್ಳಿಯಲ್ಲಿ ಹೊಸ ಬಗೆಯ ಮಕ್ಕಳ ದಿನಾಚರಣೆ

ನವೆಂಬರ್ ೧೪ ರ ರಾಷ್ಟ್ರಾದ್ಯಂತ ಮಕ್ಕಳ ದಿನಾಚರಣೆಯನ್ನು ಆಚರಿಸಿದರಂತೆ. ಇದು ಯಾಕೆ, ಅಥವಾ ಇಂಥ ದಿನಾಚರಣೆಯು ಮಕ್ಕಳ ಪ್ರಗತಿಯ ಸಂಕೇತವೆ ಎನ್ನುವ ಬಗ್ಗೆ ಯಾರು ಯೋಚಿಸಿರಲಾರರು ಇಂಥಲ್ಲಿ ಪಿರಿಯಾಪಟ್ಟಣ ತಾಲ್ಲೂಕು ಹೊನ್ನಾಪುರದ ಪ್ರೈಮರಿ ಶಾಲೆಯ ವಿದ್ಯಾರ್ಥಿಗಳು ಅಂದು ನಿಜವಾದ ಹೊಸರೀತಿಯ ರಚನಾತ್ಮಕ ದಿನಾಚರಣೆ ಮಾಡಿದರು.

೪ನೇ ಪುಟ ನೋಡಿ



## ಜೀತ ಪದ್ಧತಿ ರದ್ದು: ಮುಂದೇನು?

ಹಳ್ಳಿಗಳ ಹರಿಜನ ಕೇರಿಗಳಲ್ಲಿ ಈಗ ಎಲ್ಲರಿಗೂ ಒಂದು ರೀತಿಯ ಲವಲವಿಕೆ ಜೊತೆಗೆ ಮತ್ತೊಂದು ಕಡೆ ಮುಜುಗರ ಯಾತನೆ ಒಪ್ಪೊತ್ತಿನ ಊಟಕ್ಕೂ ಇಲ್ಲದ ಸ್ಥಿತಿ. ಹಳ್ಳಿಯ ಬಗ್ಗೆ ಯೋಚನೆ ಮಾಡುವ ಊರಿನ ಮುಖಂಡರಿಗೆ ಮತ್ತು ಬುದ್ಧಿಜೀವಿಗಳಿಗೆ ತಲೆನೋವು. ಸಂಕಷ್ಟಗಳನ್ನು ಮತ್ತು ದೂರಿನ ಮೇಲೆದೂರನ್ನು ಹೊತ್ತು ಹಳ್ಳಿಗಳಿಂದ ಪಟ್ಟಣಗಳಿಗೆ ಅಲೆತ. ಹೀಗಾಗಿ ಇತ್ತೀಚೆಗೆ ಜಿಲ್ಲಾಧಿಕಾರಿಗಳ ಕಛೇರಿಗಳ ಮುಂದೆ ಕಣ್ಣಿಗೆಟಕುಸುವಷ್ಟು ಸಾಲು, ಗೋಳು. ಅಕ್ಟೋಬರ್ ೨೪ರಂದು ಸರಕಾರ ಹೊರಡಿಸಿದ 'ರಾಷ್ಟ್ರಾದ್ಯಂತ ಜೀತ ಪದ್ಧತಿ ರದ್ದು' ಸುಗ್ರೀವಾಜ್ಞೆಯ ನಂತರ ನಮ್ಮ ಸುತ್ತಮುತ್ತಲಿನ ಹಳ್ಳಿಗಳಲ್ಲಿ ನಡೆಯುತ್ತಿರುವುದು ಇಷ್ಟು:

ಸರ್ಕಾರವು ಹೇಯ ಜೀತ ಪದ್ಧತಿ ವಿರುದ್ಧ ಹಾಗೂ ಬಡವರ ಋಣ ವಿಮೋಚನೆಗೆ ಸಂಬಂಧಿಸಿದಂತೆ ತೆಗೆದುಕೊಂಡ ದಿಟ್ಟ ನಿಲುವಿನ ಬಗ್ಗೆ ಈಗ ಎಲ್ಲೆಲ್ಲೂ ಗುಲ್ಲು. ಗುಸು ಗುಸು. ಸಾಮಾನ್ಯವಾಗಿ ಜೀತ ಪದ್ಧತಿಗೆ ಸೀಮಿತವಾದ ಹರಿಜನರಿಗೆ 'ಯಾಕಾದರೂ ಸರಕಾರ ಹಿಂಗೆ ಮಾಡ್ತು' ಎನಿಸಿಬಿಟ್ಟಿದೆ. ಜೀತ ಬಿಟ್ಟು ಮನೆಗೆ ಬಂದು ಕೂತವರಿಗೆ ಮಾಡಲು ಕೆಲಸ ಇಲ್ಲ ಕೆಲಸ ಮಾಡದಿದ್ದರೆ ಊಟವಿಲ್ಲ. ಜೀತದಲ್ಲಿದ್ದಾಗ ದೊರಕುತ್ತಿದ್ದ ೫೦-೬೦ ರೂ. ದುಡ್ಡು, ಒಂದೊ ಎರಡೊ ಒಡೆಯರ ಹಳೆಯ ಬಟ್ಟೆ-ಎರಡೊತ್ತು ಊಟ; ಇಷ್ಟಾದರೂ ಸಿಕ್ಕಿದರೆ ಸಾಕು, ಎಂದು ಒಡೆಯರ ಮನೆಯ ಬಾಗಿಲಿಗೆ ಮತ್ತೊಮ್ಮೆ ಯಾರಿಗೂ ತಿಳಿಯದಂತೆ ಜೀತಕ್ಕೆ ಸೇರಿಸಿಕೊಳ್ಳುವಂತೆ ಯಾಚಿಸುತ್ತಿದ್ದಾರೆ. ಇದನ್ನು ಕಂಡು ಇನ್ನೂ ಜೀತದಿಂದ ಮುಕ್ತಿ ಪಡೆಯದವರು ಸರ್ಕಾರದ ಕಣ್ಣಿಗೆ ಬೀಳದಂತೆ ತನ್ನ, ಒಡೆಯನಲ್ಲಿ ಯಾಚಿಸಿಕೊಂಡು ಮೊದಲಿನ ಜೀವನವನ್ನೆ ಉಳಿಸಿಕೊಳ್ಳಬೇಕೆಂದು ಹಂಬಲಿಸುತ್ತಿದ್ದಾರೆ.

ಕಡೆಯ ಪುಟ ನೋಡಿ.

ಪ್ರಿಯರೆ,

"ಶೋಷಿತ" ಇದೀಗ ಹೊರಬಂದಿದೆ.

- ★ ಇದು ಯಾವ ರಾಜಕೀಯ ಪಕ್ಷಕ್ಕೂ ಬದ್ಧವಾಗಿಲ್ಲ.
- ★ ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ, ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ, ಶೋಷಣೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಪ್ರಯತ್ನಿಸುತ್ತದೆ.
- ★ ದಲಿತರು ತಮ್ಮ ಬಗ್ಗೆ ಮತ್ತು ಸಮಾಜದ ಬಗ್ಗೆ ವೈಜ್ಞಾನಿಕವಾಗಿ ವಿವೇಚಿಸುವಂತೆ ಮಾಡುವ ಉದ್ದೇಶ ಇಟ್ಟುಕೊಂಡಿದೆ.
- ★ ವಿವಿಧ ವಿಚಾರ ಧಾರೆಗಳನ್ನು, ಸಿದ್ಧಾಂತಗಳನ್ನು ದಲಿತರಿಗೆ ತಲುಪಿಸಿ ವಿಚಾರಶೀಲರನ್ನಾಗಿಸಲು ಪ್ರಯತ್ನಿಸುತ್ತದೆ.
- ★ ದಲಿತರ ಮೂಲಭೂತ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ರಚನಾತ್ಮಕವಾಗಿ ಅವರು ಕ್ರಿಯಾಶೀಲರಾಗಲು ಶ್ರಮಿಸುತ್ತದೆ.
- ★ ಇದಕ್ಕೆಲ್ಲ ತಮ್ಮ ಸಹಕಾರ, ಬೆಂಬಲ, ಸಲಹೆಗಳು ಅತ್ಯವಶ್ಯ.

೬-೧೨-೧೯೭೪

—ಸಂಪಾದಕ

# ಜಾತಿ ಮತ್ತು ಜಾತಿವಿನಾಶ : ಒಂದು ಅನಿಸಿಕೆ

○ ಬಿ. ಕೃಷ್ಣಪ್ಪ

ಈ ದೇಶದ ಅವನತಿಗೆ ಜಾತಿಯೇ ಮೂಲ ಕಾರಣವೆಂದು ಎಲ್ಲರೂ ಒಪ್ಪುತ್ತಾರಾದರೂ ಜಾತಿಯನ್ನು ಬಿಡಲು ಯಾರೂ ಸಿದ್ಧರಿಲ್ಲ. ಶುದ್ಧ ನಾಸ್ತಿಕ ತತ್ವದ ಮೇಲೆ ನಿಂತಿರುವ ಸಮಾಜವಾದಿಗಳೂ ಜಾತಿವಾದಿಗಳೇ ಆಗಿದ್ದಾರೆ. ಭಾರತಕ್ಕೆ ಕಾಲಿಟ್ಟಾಗಲೇ ಕಮ್ಯೂನಿಸಂ ಜಾತಿ ರಾಡಿಯಲ್ಲಿ ಬಿದ್ದು ಹೊರಳಾಡ ತೊಡಗಿತು. ಆ ಮಟ್ಟಕ್ಕೆ ಅದು ಮೂಲಸತ್ವದಿಂದ ದೂರ ಸಿಡಿದು ನಿಷ್ಕ್ರಿಯವಾಗಿದೆ. ಅಂತರ್ಜಾತೀಯ ವಿವಾಹಗಳು ಜಾತಿನಾಶ ಮಾಡುವಲ್ಲಿ ಪ್ರಧಾನ ಪಾತ್ರ ವಹಿಸುತ್ತಾವಾದರೂ ಆರ್ಥಿಕ ತೊಂದರೆಯಿಂದಾಗಿ ಯಶಸ್ವಿಯಾಗದೆ ಸಮಾಜದಲ್ಲಿ ನಗೆಪಾಟಲಾಗುತ್ತಿವೆ. ದೇವಸ್ಥಾನಗಳಲ್ಲಿ ಹರಿಜನರು ಪೂಜಾರಿಗಳಾದರೆ ಜಾತಿ ನಾಶವಾಗುತ್ತದೆ ಎಂದು ತಿಳಿಯುವುದು ಬಹಳ ದೊಡ್ಡ ಭ್ರಮೆ. ಸಾರ್ವಜನಿಕ ವಿದ್ಯಾರ್ಥಿನಿಲಯಗಳನ್ನು ತೆರೆದು ಅಲ್ಲಿ ಹರಿಜನರೊಂದಿಗೆ ಸವರ್ಣೀಯ ಮಕ್ಕಳನ್ನು ಬಿಡುವುದರಿಂದ ಜಾತಿ ನಾಶವಾಗುತ್ತದೆಂದು ಯೋಚಿಸುವುದೂ ಕೂಡ ರೋಗಕ್ಕೆ ಸರಿಯಾದ ಮದ್ದಲ್ಲ.

ಯಾವುದೇ ಸಮಸ್ಯೆಗೆ ಪರಿಹಾರ ಹುಡುಕುವಲ್ಲಿ ರೋಗವನ್ನು ಸರಿಯಾಗಿ ಪತ್ತೆ ಮಾಡುವುದು ಅತಿ ಅವಶ್ಯಕ. ಜಾತಿಯ ಮೂಲ ಉಗಮವೆಲ್ಲಿ ? ಅದರ ಪೋಷಣೆಯ ಸ್ಥಾನ ಯಾವುದು ? ಅದನ್ನು ಕಡಿದು ಹಾಕುವುದರಿಂದ ಮಾತ್ರ ಜಾತಿ ನಾಶಗೊಳ್ಳಬಹುದು. ಹಿಂದೂ ಸಮಾಜ ನಿಂತಿರುವುದು ಕುಟುಂಬ ಘಟಕದ ಮೇಲೆ. ವಿಜ್ಞಾನವು ಅವಿಭಕ್ತ ಕುಟುಂಬಗಳು ಒಡೆದು ಛಿದ್ರವಾಗಲು ಒಳ್ಳೆಯ ಭೂಮಿಕೆಯನ್ನು ಒದಗಿಸಿತಾದರೂ ಕುಟುಂಬ – ಘಟಕವನ್ನು ನಾಶಪಡಿಸಲು ಇನ್ನೂ ಸಾಧ್ಯವಾಗಿಲ್ಲ. ಕುಟುಂಬ ಘಟಕವೇ ಜಾತೀಯ ಉಗಮ ಸ್ಥಾನವೂ ಪೋಷಣೆಯ ಕ್ಷೇತ್ರವೂ ಆಗಿದೆ. ಕುಟುಂಬ ರಚನೆಯ ಹಿನ್ನಲೆ ಆರ್ಥಿಕ ಅವಲಂಬನೆ. ಆರ್ಥಿಕ ಅವಲಂಬನೆಯ ಆಧಾರದ ಮೇಲೆ ರಚನೆಯಾದ ಕುಟುಂಬವು ಜಾತಿಯ ಮೂಲ ಸ್ಥಾನವಾದದ್ದು ಇತಿಹಾಸದಲ್ಲಿ ನಡೆದುಹೋದ ಮಹಾದುರಂತಗಳಲ್ಲಿ ಒಂದು. ಮುಖ್ಯವಾಗಿ ಕುಟುಂಬ ಘಟಕ ಪರಾವಲಂಬಿತ್ವವನ್ನೂ, ವ್ಯಕ್ತಿತ್ವದ ಪರಿಮಿತಿಯನ್ನೂ ನಿರ್ಮಾಣ ಮಾಡುತ್ತದೆ. ತನ್ನ ಮನೆ- ತನ್ನವರು ಎಂಬ ಭಾವನೆ ಜನತೆಯನ್ನು ವಿಶಾಲವಾಗಿ ಯೋಚಿಸಲು ಮತ್ತು ಹಾಗೆ ನಡೆದುಕೊಳ್ಳಲು ಎಂದೂ ಬಿಟ್ಟಿಲ್ಲ.

ಕೊಡುವವನು, ಸ್ವೀಕರಿಸುವವನು ಎಂಬ ಇಬ್ಬರಿದ್ದರೆ, ಅಲ್ಲಿ ಕೊಡುವವನು ತೆಗೆದುಕೊಳ್ಳುವವನ ಮೇಲೆ ತನ್ನ ಪ್ರಭಾವವನ್ನು ಬೀರತ್ತಾನೆ ತಾನು ಹೇಳಿದಂತೆ ಅವನು ನಡೆಯಬೇಕೆಂದು ಬಯಸುತ್ತಾನೆ. ತನ್ನ ಆಚಾರ ವಿಚಾರಗಳನ್ನು ಅವನಲ್ಲಿ ತುಂಬಲು ಇಚ್ಛಿಸುತ್ತಾನೆ. ಅವಲಂಬಿಯು ಅವುಗಳನ್ನು ಶಿರಸಾ ವಹಿಸಿ ಸ್ವೀಕರಿಸುತ್ತಾನೆ. ಅಂತೆಯೇ ತಂದೆ ತಾಯಿಗಳು ತಮ್ಮ ಅನಿಸಿಕೆ ಆಚಾರ ವಿಚಾರಗಳನ್ನು ಮಕ್ಕಳ ಮೇಲೆ ಹೇರುತ್ತಾರೆ. ಹುಟ್ಟಿದ ಮಗುವಿಗೆ ಜಾತಿ– ಮತ- ಕುಲ ಎಂಬ ಯಾವುದೇ ಲೋಕ ನಡವಳಿಕೆಗಳ ಕಲ್ಪನೆಗಳಿರುವುದಿಲ್ಲ. ಅವನ್ನು ಮಕ್ಕಳಲ್ಲಿ ಬೆಳೆಸುವವರು ತಂದೆ ತಾಯಿಗಳು. ಜಾತಿಯ ಸೋಂಕಿಲ್ಲದ ಮಗುವಿಗೆ ಜಾತಿ ಮುದ್ರೆಯನ್ನು ನಾಮವನ್ನು, ವಿಭೂತಿಯನ್ನು ಬಳಿಯುತ್ತಾರೆ. ಜನಿವಾರ ಶಿವದಾರಗಳ ಕಲ್ಪನೆಯನ್ನು ರೂಢಿಸುತ್ತಾರೆ. ಮನೆಯಲ್ಲಿ ಆಚರಿಸುವ ಹಬ್ಬ- ಹರಿದಿನಗಳು ಆಚಾರ ವಿಚಾರಗಳು ಮಗುವಿಗೆ ಹೆಚ್ಚು ಹೆಚ್ಚು ತಾನು ಇಂಥ ಜಾತಿ, ಇಂಥ ಮತ ಎಂಬ ಭಾವನೆಗಳನ್ನು ಬೇರೂರುವಂತೆ ಮಾಡುತ್ತವೆ. ಇವನು ಬ್ರಾಹ್ಮಣ, ಇವನು ಲಿಂಗಾಯಿತ, ಇವನು ಒಕ್ಕಲಿಗ, ಇವನು ಹೊಲೆ-ಮಾದಿಗ- ಇವನನ್ನ ಮುಟ್ಟಿದರೆ ಅಪವಿತ್ರ ಎಂಬ ಮೇಲು-ಕೀಳು ಭಾವನೆಗಳು ಹೇಳಿಕೊಡದೆ ಮಕ್ಕಳಿಗೆ ಹೇಗೆ ಬರಲು ಸಾಧ್ಯ ? ಹೀಗಾಗಿ ಮಕ್ಕಳಲ್ಲಿ ಜಾತಿ ಮತಗಳ ಕಲ್ಪನೆ ಹೆಚ್ಚಾಗಲು ಕುಟುಂಬ ಘಟಕವು ಅತ್ಯಂತ ಫಲವತ್ತಾದ ಕ್ಷೇತ್ರವನ್ನು ಒದಗಿಸಿ ಕೊಡುತ್ತದೆ. ಬಾಲ್ಯದಿಂದಲೇ ಜಾತಿ ಭಾವನೆಯನ್ನು ಬಿತ್ತಿ ಅದು ಬೆಳೆದುಹೆಮ್ಮರವಾದ ಮೇಲೆ ಮಾನವನಿಗೆ ಜಾತಿ ಇಲ್ಲ, ಎಲ್ಲರೂ ಒಂದೇ ಎಂದರೆ ಅವರು ಹೇಗೆ ನಂಬಿಯಾರು ? ಪ್ರತಿಯೊಬ್ಬ ಹಿಂದೂವಿನ ಹೆಸರಿನಲ್ಲಿ ಅವನವನ ಜಾತಿ ಸಂಪ್ರದಾಯಗಳು ಎದ್ದುತೋರುತ್ತವೆ. ಆದ್ದರಿಂದ ಜಾತಿಯ ಮೂಲಸುಳಿ ಇರುವುದು ಕುಟುಂಬ ಘಟಕದಲ್ಲಿ ಎಂಬುದು ಸೂರ್ಯ ಪ್ರಕಾಶದಷ್ಟು ನಿಚ್ಚಳ.

ಕುಟುಂಬ ಘಟಕವನ್ನು ಒಡೆಯುವುದೆಂದರೆ ತಂದೆ ತಾಯಿ ಹಾಗು ಮಕ್ಕಳ ಪರಾವಲಂಬಿತನವನ್ನು ಕಿತ್ತುಹಾಕುವುದು. ಚಿಕ್ಕಂದಿನಲ್ಲಿ ಮಕ್ಕಳನ್ನು ಪೋಷಿಸುವ ಹೊಣೆಗಾರಿಕೆಯಿಂದ ತಂದೆ ತಾಯಿಗಳು ಹಾಗು ಮಕ್ಕಳು ಮುದಿತನದ ತಂದೆ ತಾಯಿಗಳನ್ನು ಸಾಕುವ ಹೊಣೆಗಾರಿಕೆಯಿಂದ ಮುಕ್ತರಾಗುವುದು ಮಕ್ಕಳನ್ನು ಸಾಕಲು, ಅವರಿಗೆ ವಿದ್ಯಾಭ್ಯಾಸವನ್ನು ಕೊಡಲು ಶಕ್ತಿಯಿಲ್ಲದ ಹಾಗೂ ಜಾತಿಯ ಮಾಲಿನ್ಯತೆಯಿಂದ ನರಳುತ್ತಿರುವ ಈ ದೇಶದ ೨೧ ಕೋಟಿ ದಲಿತರು ಈ ವ್ಯವಸ್ಥೆಯ ಬಗ್ಗೆ ತೀವ್ರವಾಗಿ ಯೋಚಿಸಬೇಕು. ಇಂತಹ ವ್ಯವಸ್ಥೆಯನ್ನು ತರುವ ಯಾವುದೇ ರಾಜಕೀಯ ಪಕ್ಷದೊಂದಿಗೆ ರಾಜಿ ಮಾಡಿಕೊಳ್ಳಬೇಕು. ಅಲ್ಲದೆ ದಲಿತರಲ್ಲಿಯೂ ನೂರಾರು ಜಾತಿಗಳಿದ್ದು ಅವುಗಳ ನಾಶಕ್ಕೂ ಕುಟುಂಬ ಘಟಕದ ನಾಶವು ಅವಶ್ಯಕ ಎಂಬುದನ್ನು ನಾವು ಮರೆಯಲಾಗ[illegible] ಇದರಿಂದ ವ್ಯಕ್ತಿಯು ಸಮಾಜೀಕರಣವಾಗುತ್ತದೆ. ವ್ಯಕ್ತಿಯ ಪೋಷಣೆ, ವಿದ್ಯಾಭ್ಯಾಸ, ಬೆಳವಣಿಗೆ ಸಮಾಜದ ಅಂದರೆ ಸರ್ಕಾರದ ಜವಾಬ್ದಾರಿಯಾಗುತ್ತದೆ. ವ್ಯಷ್ಟಿ ಕಲ್ಪನೆ ನಾಶಗೊಂಡು ಸಮಷ್ಟಿ ಪ್ರಜ್ಞೆ ಬೆಳೆಯುತ್ತದೆ. ಜಾತಿ ಮತ ಧರ್ಮಗಳು ಬಿಗಿಗೊಂಡಿರುವ ಈ ದೇಶದಲ್ಲಿ ಇದು ಅಸಾಧ್ಯ ಎಂದು ಕೆಲವರಿಗೆ ಅನ್ನಿಸಬಹುದು. ತಂದೆ ಮಕ್ಕಳನ್ನು ಅಗಲಿಸಿ ಪ್ರೀತಿ-ವಾತ್ಸಲ್ಯ ಮುಂತಾದ ಮಾನವನ ಮೂಲಭೂತ ಭಾವನೆಗಳನ್ನೇ

( ಮುಂದಿನ ಪುಟಕ್ಕೆ )

# ದಲಿತ ನುಡಿ

ಈ ದೇಶದಲ್ಲಿ ಯಾವತ್ತೂ ದಲಿತನ ಮೇಲೆ ದೌರ್ಜನ್ಯ ನಡೆಯದೆ ಮುಂದೆಸರಿದ ದಿನವೇ ಇಲ್ಲ. —ದೇಮ

---

ಎರಡು ಕವನಗಳು

## ಕರಿಗೌಡರ ಕಬ್ಬಿಣದ ನೇಗಿಲು

ಕೆದಕಿದಷ್ಟೂ ಕರಲೇಳುವ
ಕಿತ್ತಷ್ಟೂ ಕಳೆಯುಳಿಯುವ ನನ್ನ—
ದಾಗಬೇಕಾದ ನನ್ನಪ್ಪನ ಗದ್ದೆಯಲ್ಲಿ
ನಮ್ಮೂರ ಕರಿಗೌಡರ ಕಬ್ಬಿಣ—
ದ ನೇಗಿಲು ಗರ ಗರ ಹರಿವಾಗ
ಕಳೆಯೂ ಇಲ್ಲ
ಕರಲೂ ಇಲ್ಲ ! ?

## ನನ್ನವರು

ಅಪ್ಪನಪ್ಪನ ನುಡಿಗೆ
ತಲೆತೆತ್ತು ಅತ್ತತ್ತು
ತಮ್ಮೆದೆಯ ರಕ್ತವನೆ ಉತ್ತುತ್ತು
ಹಿಂದೂಯಿಸಮ್ ಗಾಂಧೀಯಿಸಮ್ —
ಗಳನೆಟ್ಟು ಕಣ್ಬಿಟ್ಟು
ಕೊತ ಕೊತ ಕುದಿದು ಕರ್ರಗಾದವರು
ಬರೀ ಹೆಸರಿಗೆ ಬಸುರಾದವರು—
ಇವರು ನನ್ನವರು
ಹರಿಜನರು ಕರಿಜನರು

—ಕೆಂಪ

---

ಸಂಪಾದಕ:
ಇಂದೂಧರ ಹೊನ್ನಾಪುರ
ಜೊತೆಗೆ:
ಶಿವಾಜಿ ಗಣೇಶನ್
ಶಿವಮಲ್ಲ ದೇವನೂರು
ವಿಳಾಸ:
೫೧೬ ೧೫ನೇ ಮೇನ್
ಸರಸತಿಪುರಂ, ಮೈಸೂರು-೯

# ಹೋರಾಟದ ಬದುಕಿನ ಡಾ|| ಅಂಬೇಡ್ಕರ್

ಪ್ರತಿ ದೇಶದಲ್ಲೂ ಆರ್ಥಿಕ, ಸಾಮಾಜಿಕ ಅಸಮಾನತೆಗಳಿಂದ ಹಿಂದುಳಿದ ಜನ ಒಂದಲ್ಲ ಒಂದು ರೀತಿಯ ತುಳಿತಕ್ಕೊಳಪಟ್ಟಿದ್ದಾರೆ. ಇದು ಭಾರತಕ್ಕೇನು ಹೊರತಲ್ಲ.

ಭಾರತದಲ್ಲಿ ಅತಿ ಕ್ರೂರಹಿಂಸೆಗೆ ಒಳಗಾದವರು, ಒಳಗಾಗಿವವರು ದಲಿತರು ಎಂಬುದನ್ನು ಯಾವ ಮಾನವೀಯತೆ ಇರುವ ಮಗನೂ ಹೇಳುತ್ತಾನೆ. ದಿನವು ಅತ್ಯಾಚಾರ, ಅವಮಾನ. ಕೊಲೆ, ಸುಲಿಗೆಗೆ ತುತ್ತಾಗುತ್ತ ಮೂಕವೇದನೆಯನ್ನು ಅನುಭವಿಸುತ್ತ, ಸಿಟ್ಟು ಬಂದರೂ ಪ್ರತಿಭಟಿಸಲಾರದ ಅಸಹಾಯಕತೆಯಿಂದ ಉಸಿರಾಡುತ್ತಿದ್ದೂ, ಸತ್ತ ಬದುಕ ಬದುಕುತ್ತಿರುವ ದಲಿತ ಜನಾಂಗದಲ್ಲಿ ಹುಟ್ಟಿದ ಮೊಟ್ಟ ಮೊದಲ ಪ್ರತಿಭಟನಾ ಶಕ್ತಿ ಡಾ|| ಭೀಮರಾಂಜಿ ಅಂಬೇಡ್ಕರ್.

ಅಂಬೇಡ್ಕರರು ಬಾಲ್ಯದಿಂದಲೂ ಅತಿ ಘೋರ ಯಾತನೆಯನ್ನು ಅನುಭವಿಸಿದರು. ಈ ಯಾತನೆಯ ನಡುವೆಯೂ ಅವರು ಹೆಚ್ಚು ವಿದ್ಯಾಭ್ಯಾಸ ಮಾಡಿ, ತನ್ನ ಜನಾಂಗದ ನೋವುಗಳು, ನಿರಾಶೆಗಳು, ಎಲ್ಲವನ್ನು ಕಂಡು ಉಂಡು, ಇಂಥವೆಲ್ಲಕ್ಕೂ ಕಾರಣವಾಗಿರುವ ಹೇಯ ದಾರ್ಮಿಕ ಪ್ರಜ್ಞೆ, ಅಸಮಾನತೆಯಿಂದ ಕೂಡಿರುವ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಹೋರಾಟದಲ್ಲಿ ತೊಡಗಿದರು. ಹೋರಾಟದ ಮೊದಲ ಹಂತವಾಗಿ ಅವರು ದಲಿತ ಸಂಘಟನೆಯಲ್ಲಿ ತೊಡಗಿದರು.

ದಲಿತರನ್ನು ತಬ್ಬಿ ಹೋರಾಟಕ್ಕಿಳಿದ ಅವರು ಕೆರೆ ಬಾವಿಗಳಲ್ಲಿ ನೀರು ತೆಗೆಸುವುದು, ದೇವಸ್ಥಾನಗಳಿಗೆ ದಲಿತರನ್ನು (ಅಸ್ಪೃಶ್ಯರನ್ನು) ನುಗ್ಗಿಸುವುದರ ಮೂಲಕ ಹಿಂದೂ ಧರ್ಮದ ದುಷ್ಟ ಪದ್ಧತಿಗಳನ್ನು ಎದುರಿಸಿ ನಿಂತರು. ದಲಿತರ ಹಿಂದುಳಿಯುವಿಕೆಗೆ ಆರ್ಥಿಕ ಅಸಮಾನತೆಯೇ ಕಾರಣವೆಂದು ತಿಳಿದು ಅವರು ವಿಶೇಷ ಸವಲತ್ತುಗಳಿಗೆ ಆಗ್ರಹಪಡಿಸಿದರು. 'ಸವರ್ಣೀಯರ ಮನಪರಿವರ್ತನೆಯಿಂದ ಅಸ್ಪೃಶ್ಯತೆಯ ನಿವಾರಣೆ ಸಾಧ್ಯ' ಎಂದು ತಿಳಿದಿದ್ದ ಗಾಂಧೀಜಿಯ ದೃಷ್ಟಿಯಲ್ಲಿ ಅಂಬೇಡ್ಕರ್ ಬದ್ಧ ವೈರಿಯಾಗಿ ಕಾಣಿಸಿಕೊಂಡರು.

ಬದುಕಿನ ಪ್ರತಿ ಹಂತ ಹಂತಗಳಲ್ಲೂ, ಅಸ್ಪೃಶ್ಯತೆಯ ವಿರುದ್ಧ ಮಾನವೀಯ ಹಕ್ಕು ಭಾದ್ಯತೆಗಳಿಗಾಗಿ ಹೋರಾಡಿದರು. ಇದಕ್ಕೆ ದಲಿತರನ್ನು ಸಂಘಟಿಸಲು 'ಮೂಕನಾಯಕ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಹಿಂದು ಧರ್ಮದ ಹೀನ ಕೃತ್ಯಗಳಿಂದ ದಲಿತಜನಾಂಗ ದಿಕೆಟ್ಟು ಹೋಗುತ್ತದೆ ಎಂದು ತಿಳಿದ ಅಂಬೇಡ್ಕರ್ ನಾನು ಹಿಂದುವಾಗಿ ಸಾಯುವುದಿಲ್ಲ ಎಂದು ಪಣತೊಟ್ಟು ಲಕ್ಷಾಂತರ ಸಹೋದ್ಯೋಗಿಗಳೊಂದಿಗೆ, ಬಾಂಧವರೊಂದಿಗೆ, ಬೌದ್ಧ ಮತ ಅವಲಂಬಿಸಿದರು. ಈ ಮತಾಂತರದ ಘೋರ ದುರಂತಕ್ಕೆ ಹಿಂದೂ ಧರ್ಮದ ಅಮಾನುಷ ರೀತಿ ನೀತಿಯೇ ಕಾರಣವಾಗಿತ್ತು.

14-4-1891 ರಲ್ಲಿ ಜನಿಸಿ 6-12-1956 ರಂದು ನಿಧನ ಹೊಂದಿದ ಈ ಪ್ರತಿಭಟನಾ ಶಕ್ತಿಯ ನೆರಳಲ್ಲಿ ಇಂದು ಅಲ್ಲಲ್ಲಿ ಹೋರಾಟದ ಸುಳಿವು ಇಣುಕಿದರೂ ಬದುಕಿನ ಕರಾಳತೆ ಕಣ್ಕುಟ್ಟುತ್ತಿದೆ.

---

### ಒಂದು ಅನಿಸಿಕೆ

೨ನೇ ಪುಟದಿಂದ

ನಾಶಮಾಡುವ ಇಂಥ ವ್ಯವಸ್ಥೆ ನರಕಪ್ರಾಯವಾಗಿ ಕೆಲವರಿಗೆ ತೋರಬಹುದು. ಆದರೆ ಕುಟುಂಬಘಟಕವನ್ನು ನಾಶಪಡಿಸಿ ವ್ಯಕ್ತಿಯನ್ನು ಸಮಾಜೀಕರಣಗೊಳಿಸದ ಹೊರತು ಈ ದೇಶಕ್ಕೆ ಮುಕ್ತಿ ಇಲ್ಲ. ನೀರುಕುಡಿಯುವುದರಿಂದ ಮನುಷ್ಯ ಬದುಕುತ್ತಾನೆ. ಎನ್ನುವುದಾದರೆ ನೀರು ಕುಡಿಯುವಾಗ ಕೈತಣ್ಣಗಾಗುವ ಸಣ್ಣ ತೊಂದರೆಯನ್ನು ಅನುಭವಿಸಲೇಬೇಕು.

ಶೋಷಿತ

# ಕಿಡಿಗೇಡಿ ಕಣ್ ನೋಟ

ಯಾವುದೋ ಬ್ರಾಹ್ಮಣರ ಕಾಫಿ ಕ್ಲಬ್ಬಿಗೆ ಹೋಗಿ ಕೂತವನೆ ಟೀಗೆ ಹೇಳಿ ಹೊಟೆಲ್ಲ ಸುತ್ತಲೂ ಕಣ್ಣಾಡಿಸುತ್ತಿದ್ದೆ. ಬಾಳ ಹೊತ್ತಾದರೂ ಟೀ ಬಾರದಿದ್ದ ಪ್ರಯುಕ್ತ ಬಂದು ಹೋಗುತ್ತಿದ್ದ ಜನರ ಮೇಲೆ ನನ್ನ ಕಣ್ಣು ಓಡಾಡುತ್ತಿತ್ತು. ಇದ್ದಕ್ಕಿದ್ದಂತೆ ರಫ್ ಅಂತ ಸದ್ದಾಯಿತು. ಏನಪ್ಪ ಅಂತ ಸದ್ದು ಬಂದ ಕಡೆಗೆ ನೋಡಿದೆ. ಯಾರೋ ಒಬ್ಬ ಗಿರಾಕಿ ಕ್ಲೀನರ್‌ನ ಕೆನ್ನೆಗೆ ಬಾರಿಸಿದ್ದನು. ಕಾರಣ: ಆ ಕ್ಲೀನರು ಗಿರಾಕಿಯ ಬಿಳಿಬಟ್ಟೆಗೆ ಸ್ವಲ್ಪ ನೀರು ಚೆಲ್ಲಿಸಿದ್ದ. ಅದಕ್ಕಾಗಿ ಕುಪಿತಗೊಂಡ ಗಿರಾಕಿಯು ಕ್ಲೀನರ್‌ನ ಕೆನ್ನೆ ಕಾಯಿಸಿದ್ದ. ಕ್ಲೀನರ್‌ಗೆ ಏನೂ ತೋಚದೆ ಬೆಬೆಗುಟ್ಟುತ್ತ ನಿಂತಿದ್ದ.

## ಹಿಂದೂ ಮುಸ್ಲಿಂ ಕ್ಲೀನರುಗಳು

ಗಿರಾಕಿ ಇನ್ನೂ ಕುದಿಯುತ್ತಿದ್ದ. ಹೊಟೆಲ್ಲ ಮಾಲಿಕನೆ ಖುದ್ದು ಬಂದು ನಿಂತು ಪರಿಪರಿಯಾಗಿ ಗಿರಾಕಿಯನ್ನು ಸಮಾಧಾನಪಡಿಸುತ್ತಿದ್ದ. ಉಳಿದ ಗಿರಾಕಿಗಳಲ್ಲಿ ಬಹುಪಾಲು ಜನ ತಮಗೂ ಇದಕ್ಕೂ ಏನೂ ಸಂಬಂಧ ಇಲ್ಲದವರಂತೆ ಇದ್ದರು. ಕೆಲವರು 'ಇನ್ನೂ ನಾಕು ತದಕಬೇಕು. ಬೋಳಿಮಕ್ಕಳಿಗೆ ತಿಂದ ಕೊಬ್ಬು' ಎಂದು ಬಾಯಾಡಿಸುತ್ತಿದ್ದರು. ಅಲ್ಲಿದ್ದ ಯಾವೊಬ್ಬನಿಂದಲೂ ಕ್ಲೀನರ್ ಬಗ್ಗೆ ಪರವಾದ ಮಾಯಾಗಲಿ, ಕಣ್ಣಲ್ಲಿ ಸಹಾನುಭೂತಿಯಾಗಲಿ ಕಾಣಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಪರಿಸ್ಥಿತಿ ಮಾಮೂಲಿಯಾಯ್ತು.

ಇದಾದ ಎಷ್ಟೋ ದಿನಗಳ ಮೇಲೆ ಒಂದು ದಿನ ಯಾವುದೋ ಒಂದು ಮುಸ್ಲಿಮರ ದರಬಾರ್ ಹೊಟೆಲ್ಲಿಗೆ ಚಾ ಕುಡಿಯಲು ಹೋಗಿದ್ದೆ. ಬ್ರಾಹ್ಮಣರ ಕಾಫಿ ಕ್ಲಬ್‌ಗಿಂತ ಭಿನ್ನ ವಾತಾವರಣ ಇತ್ತು. ಬ್ರಾಹ್ಮಣರ ಕಾಫಿ ಕ್ಲಬ್‌ಗಿಂತ ಭಿನ್ನ ವಾತಾವರಣ ಇತ್ತು. ಬ್ರಾಹ್ಮಣರ ಕಾಫಿ ಕ್ಲಬ್ಬಿನ ಕ್ಲೀನರ್‌ಗೆ ಗಿರಾಕಿಯು ತಟ್ಟಿದ್ದ ಘಟನೆ ಇನ್ನೂ ಮನಸ್ಸಲ್ಲಿ ಹಸಿಯಾಗಿದ್ದರಿಂದ ಇಲ್ಲೂ ಕ್ಲೀನರ್–ಗಿರಾಕಿ ಸಂಬಂಧದ ಬಗ್ಗೆ ಹೆಚ್ಚು ಗಮನವಿಟ್ಟಿದ್ದೆ. ಇಲ್ಲಿ ಎಲ್ಲಾ ಗಿರಾಕಿಗಳು ಬಯ್ಯ (ಸೋದರ) ಎಂದೇ ಮಾತಾಡಿಸುತ್ತಿದ್ದು ನನ್ನನ್ನು ಚಕಿತಗೊಳಿಸಿತು. ಇಲ್ಲಿನ ಕ್ಲೀನರ್‌ಗಳ ಮುಖದಲ್ಲಿ ಹಿಂದೂಹೊಟೆಲ್ಲಿನ ಕ್ಲೀನರ್‌ಗಳ ಮುಖದಂತೆ ದೈನ್ಯತೆ ಅಥವಾ ಕರುಣಾಕಾಂಕ್ಷೆ ಇರಲಿಲ್ಲ. ಇದ್ಯಾಕೆ ಇಲ್ಲಿ ಹೀಗೆ ಎಂಬ ಪ್ರಶ್ನೆ ನನ್ನ ಮನಸ್ಸಲ್ಲಿ ಸಿಕ್ಕಿಕೊಂಡಿತು. ಹಿಂದೂ ಧರ್ಮದಲ್ಲಿ ದುಡಿಮೆಯನ್ನು ಕೀಳಾಗಿ ಕಂಡದ್ದರಿಂದಲೇ? ಅಥವಾ ಹಿಂದೂ ಧರ್ಮದಲ್ಲಿ ಜಾತಿಪದ್ಧತಿ ಅಸ್ಪ್ರಶ್ಯತೆಗಳು ಇರುವುದರಿಂದಲೇ? ಅಥವಾ?

—ಕಿಡಿಗೇಡಿ

### ಜೀತ ಪದ್ಧತಿ ರದ್ದು : ಮುಂದೇನು?

೧ನೇ ಪುಟದಿಂದ

ಹರಿಜನರು ಹೆಚ್ಚಿಗೆ ಸಂಖ್ಯೆಯಲ್ಲಿರುವ ಹಲವಾರು ಊರುಗಳಲ್ಲಿ ಈಗಾಗಲೆ ಜೀತ ಪದ್ಧತಿಯಿಂದ ಹೊರಬಂದು ತಮ್ಮ ಕಾಲ ಮೇಲೆ ತಾವು ನಿಲ್ಲಲು ಕೂಲಿ ಮಾಡಲು ತೊಡಗಿದ್ದಾರೆ. ಇದು ಮೊದಲಿಂದ ದುಡಿಸಿಕೊಂಡವರಿಗೆ ಕಣ್ಣು ಕೆಂಪಗಾಗುವಂತೆ ಮಾಡಿದೆ. ಇವರು ತಮ್ಮ ತಮ್ಮಲ್ಲೆ ಒಂದು ಒಪ್ಪಂದಕ್ಕೆ ಬಂದು ಜೀತದಿಂದ ಹೊರಬಂದವರಿಗೆ ಕೂಲಿಯೂ ದೊರೆಯದಂತೆ ಮಾಡಿದ್ದಾರೆ. ಇತ್ತೀಚೆಗೆ ಟಿ. ನರಸೀಪುರ ತಾಲೂಕಿನ ತಲಕಾಡು ಮತ್ತು ಅಕ್ಕ ಪಕ್ಕದ ಊರುಗಳಲ್ಲಿ ಇದು ಹರಿಜನ ಮತ್ತು ಮೇಲ್ವರ್ಗಗಳ ನಡುವಿನ ವಿರಸಕ್ಕೆ ಕಾರಣವಾಗಿ ಹರಿಜನರಾರಿಗೂ ಕೂಲಿ ದೊರೆಯದೆ ಊರೂರು ಅಲೆಯುವಂತಾಗಿದೆ.

ಈ ತರಹದ ಘಟನೆಗಳು ಈಗೀಗ ಸುಮಾರು ಹಳ್ಳಿಗಳಲ್ಲಿ ಹಬ್ಬುತ್ತಿದ್ದು ಜೀತದಿಂದ ಮುಕ್ತರಾದವರಿಗೆ ಇಕ್ಕಟ್ಟಾದ ಪರಿಸ್ಥಿತಿ ಉಂಟಾಗಿದೆ. ಈಗಷ್ಟೇ ಈ ವಿಷಯವನ್ನು ಗುರುತಿಸಿರುವ ಸರಕಾರ ಈ ಬಗ್ಗೆ ಸಾಕಷ್ಟು ಕ್ರಮಗಳನ್ನು ಯೋಜಿಸಿಕೊಂಡಿರುವುದು ಮೆಚ್ಚುವಂತಹದು. ಆದರೆ ಬೇರೆ ವಿಷಯಗಳಲ್ಲಿಯಂತೆ ಈ ದಿಶೆಯಲ್ಲಿ ವಿಳಂಬವಾದಲ್ಲಿ ಅಥವಾ ಅದಕ್ಷತೆ ತೋರಿದಲ್ಲಿ ದಲಿತರನ್ನು ಮತ್ತಷ್ಟು ದೌರ್ಜನ್ಯಕ್ಕೆ ನೂಕಿದಂತಾಗುತ್ತದೆಯೆ ಹೊರತು ಜೀತ ಪದ್ಧತಿಯ ರದ್ಧತಿಯಷ್ಟೆ ಮಹತ್ವದ ವಿಷಯವಾಗಲಾರದು.

### ಮಕ್ಕಳ ದಿನಾಚರಣೆ

೧ನೇ ಪುಟದಿಂದ

ಎಂಟು ಹತ್ತು ವರ್ಷದ ಮಕ್ಕಳು, ಉಪಾಧ್ಯಾಯರುಗಳೊಟ್ಟಿಗೆ ಕಡ್ಡಾಯವಾಗಿ ಮಕ್ಕಳನ್ನು ಶಾಲೆಗೆ ಕಳುಹಿಸಿ, ಅನಕ್ಷರತೆಯೇ ನಮ್ಮ ದೊಡ್ಡ ಶತ್ರು ಎಂಬುದಾಗಿ ಸಾರಿ ಊರಲ್ಲಿ ಮೆರವಣಿಗೆ ಮಾಡಿದರು. ಸ್ವಪ್ರೇರಣೆಯಿಂದ, ಇಂಥ ವೈಶಿಷ್ಟ್ಯಪೂರ್ಣವಾದ ದಿನಾಚರಣೆ ಆಚರಿಸಿ ಹೊಸ ಮೆಟ್ಟಲನ್ನು ಹಾಕಿಕೊಟ್ಟರು.

ಮಕ್ಕಳ ದಿನಾಚರಣೆಯೆಂದರೆ ಅವರನ್ನು ಹಾಡಿಸಿ, ಕುಣಿಸಿ, ಡ್ರಿಲ್ ಮಾಡಿಸಿ, ನಾಕು ಚಾಕಲೆಟ್ ಕೊಟ್ಟು ಕಳುಹಿಸುವ ಜನತೆ ಇಂಥ ಸಕ್ರಿಯಾತ್ಮಕ ಕೆಲಸಗಳತ್ತ ಗಮನ ಹರಿಸಿ, ಆಚರಿಸಿದರೆ ಒಳ್ಳೆಯದಲ್ಲವೆ?

### ಹುಟ್ಟು ಹೋರಾಟಗಾರ

ದಿ|| ಬಸವರಾಜು

ದಿನ ಬೆಳಗಾದರೆ ಅಧಿಕಾರಶಾಹಿ, ಬಂಡವಾಳಶಾಹಿ ಮತ್ತು ಮೇಲುವರ್ಗದ ವಿರುದ್ಧ ಸಿಟ್ಟುಕಾರುತ್ತ, ನಾಲ್ಕನೆ ದರ್ಜೆಯ ನೌಕರನಾಗಿ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ನವಸಮಾಜಕ್ಕಾಗಿ ಹೋರಾಟ ನಡೆಸುತ್ತಿದ್ದ ಬಸವರಾಜ್ ಒಮ್ಮೆ ಇದ್ದಕ್ಕಿದ್ದಂತೆ ಕಣ್ಮರೆಯಾದ ಅವನ ಸಾವು ಇನ್ನೂ ನಿಗೂಢವಾಗಿಯೇ ಇದೆ.

ಎಚ್. ಗೋವಿಂದಯ್ಯ ಅವರಿಂದ, ಆಂದೋಲನ ಮುದ್ರಣ, ಮೈಸೂರು–೯ ಇಲ್ಲಿ ಮುದ್ರಿಸಲ್ಪಟ್ಟು ಅವರಿಂದಲೇ ಪ್ರಕಟಿಸಲ್ಪಟ್ಟಿತು.